

# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 2042 /771 |
| ಸದಸ್ಯರ ಹೆಸರು | : | ಶ್ರೀ ಕೆ.ಎ. ತಿಪ್ಪೇಸ್ವಾಮಿ<br>(ನಾಮನಿರ್ದೇಶನ ಹೊಂದಿದವರು) |
| ಉತ್ತರಿಸುವ ದಿನಾಂಕ | : | 24.03.2021. |
| ಉತ್ತರಿಸುವ ಸಚಿವರು | : | ಮೀನುಗಾರಿಕೆ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು. |

| ಕ್ರ.ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದ ಕೇಂದ್ರ ಸರ್ಕಾರದ "ಸಾಗರ ಮಾಲಾ" ಯೋಜನೆ ಅಡಿಯಲ್ಲಿ ಕಡಲು ತೀರ ಅಭಿವೃದ್ಧಿ ಮತ್ತು ಸಣ್ಣ ಬಂದರುಗಳ ಅಭಿವೃದ್ಧಿಗೆ ಇದುವರೆಗೂ ಕೈಗೊಂಡಿರುವ ಕಾರ್ಯಕ್ರಮಗಳು ಯಾವುವು; (ಜಿಲ್ಲಾವಾರು ಮತ್ತು ವರ್ಷಾವಾರು ಮಾಹಿತಿ ನೀಡುವುದು) | ಕೇಂದ್ರ ಸರ್ಕಾರದ "ಸಾಗರಮಾಲಾ ಯೋಜನೆ"ಯಡಿಯಲ್ಲಿ ಯಾವುದೇ ಕಡಲು ತೀರ ಅಭಿವೃದ್ಧಿ ಕಾರ್ಯಕ್ರಮಗಳು ಇರುವುದಿಲ್ಲ.<br>"ಸಾಗರಮಾಲಾ ಕೋಸ್ಟಲ್ ಬರ್ತ್ ಯೋಜನೆ"ಯಡಿ ರಾಜ್ಯದ ಹಳೇ ಮಂಗಳೂರು ಹಾಗೂ ಕಾರವಾರ ಕಿರು ಬಂದರುಗಳ ಅಭಿವೃದ್ಧಿಗೆ 2017-18 ನೇ ಸಾಲಿನಲ್ಲಿ ಈ ಕೆಳಕಂಡ 4 ಕಾಮಗಾರಿಗಳು ಮಂಜೂರಾಗಿರುತ್ತದೆ.<br>**ಉತ್ತರ ಕನ್ನಡ ಜಿಲ್ಲೆ :**<br>1. ಕಾರವಾರ ಬಂದರಿನಲ್ಲಿ ಉತ್ತರ ದಿಕ್ಕಿಗೆ ಹೊಸದಾಗಿ 1160 ಮೀ. ಉದ್ದದ ಬ್ರೇಕ್‌ವಾಟರ್ ನಿರ್ಮಾಣ ಕಾಮಗಾರಿ ಹಾಗೂ ಪ್ರಸ್ತುತ ದಕ್ಷಿಣ ದಿಕ್ಕಿಗೆ ಇರುವ 250 ಮೀ. ಉದ್ದದ ಬ್ರೇಕ್‌ವಾಟರ್‌ನ್ನು 145 ಮೀ. ಉದ್ದಕ್ಕೆ ವಿಸ್ತರಿಸುವ ರೂ. 215.00 ಕೋಟಿ ಮೊತ್ತದ ಕಾಮಗಾರಿ<br>2. ಕಾರವಾರ ಬಂದರಿನಲ್ಲಿ 250 ಮೀ. ಉದ್ದದ ರೂ.61.00 ಕೋಟಿ ಮೊತ್ತದ ಕೋಸ್ಟಲ್ ಬರ್ತ್ ನಿರ್ಮಾಣ ಕಾಮಗಾರಿ<br>**ದಕ್ಷಿಣ ಕನ್ನಡ ಜಿಲ್ಲೆ :**<br>1. ಮಂಗಳೂರು ಹಳೇ ಬಂದರಿನಲ್ಲಿ ರೂ.65.00 ಕೋಟಿ ಮೊತ್ತದ ಕೋಸ್ಟಲ್ ಬರ್ತ್ ನಿರ್ಮಾಣ ಕಾಮಗಾರಿ<br>2. ಮಂಗಳೂರು ಹಳೇ ಬಂದರಿನಲ್ಲಿ ರೂ.29.00 ಕೋಟಿ ಮೊತ್ತದ ಕ್ಯಾಪಿಟಲ್ ಡ್ರೆಜಿಂಗ್ (ಬೆಂಗ್ರೆ ಬದಿ) ಕಾಮಗಾರಿ |
| ಆ) | ಈ ಕಾರ್ಯಕ್ರಮಗಳ ಮತ್ತು ಯೋಜನೆಗಳ ಅನುಷ್ಠಾನಕ್ಕಾಗಿ ಸ್ಥಳಾಂತರಿಸಲಾದ ಕಡಲ ತೀರದ ಬಳಿ ಬರುವ ಕುಟುಂಬಗಳು ಎಷ್ಟು; ಮತ್ತು ಈ ಕುಟುಂಬಗಳ ಪುನರ್ವಸತಿಗೆ ಒದಗಿಸಲಾಗಿರುವ ಸವಲತ್ತುಗಳು ಯಾವುವು;<br>(ಸಂಪೂರ್ಣ ಮಾಹಿತಿ ನೀಡುವುದು) | ಈ ಕಾರ್ಯಕ್ರಮಗಳ ಮತ್ತು ಯೋಜನೆಗಳ ಅನುಷ್ಠಾನಕ್ಕಾಗಿ ಕಡಲ ತೀರದ ಬಳಿ ಇರುವ ಯಾವುದೇ ಕುಟುಂಬಗಳನ್ನು ಸ್ಥಳಾಂತರ ಮಾಡಿರುವುದಿಲ್ಲ. |

| ಕ್ರ.ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಇ) | ರಾಜ್ಯದಲ್ಲಿ "ಸಾಗರ ಮಾಲಾ" ಯೋಜನೆಯಡಿ ಕೈಗೊಂಡಿರುವ ಕಾರ್ಯಕ್ರಮ ಮತ್ತು ಅನುಷ್ಠಾನದಲ್ಲಿ ಅಂದಾಜು ಮೊತ್ತದ ಏರಿಕೆ ಮತ್ತು ಪೂರ್ಣಗೊಳಿಸಬೇಕಾದ ಕಾಲಾವಧಿ ಮೀರಲಾಗಿದೆಯೇ? (ಸಂಪೂರ್ಣ ವಿವರ ನೀಡುವುದು) | ರಾಜ್ಯದಲ್ಲಿ "ಸಾಗರಮಾಲಾ" ಯೋಜನೆಯಡಿ ಕೈಗೊಂಡಿರುವ ಕಾರ್ಯಕ್ರಮ ಮತ್ತು ಅನುಷ್ಠಾನದಲ್ಲಿ ಅಂದಾಜು ಮೊತ್ತದ ಏರಿಕೆ ಆಗಿರುವುದಿಲ್ಲ ಮತ್ತು ಪೂರ್ಣಗೊಳಿಸಬೇಕಾದ ಕಾಲಾವಧಿ ಮೀರಿರುವುದಿಲ್ಲ. ಸದರಿ ಕಾಮಗಾರಿಗಳ ವಿವರಗಳು ಕೆಳಕಂಡತಿದೆ.<br><br>**ಉತ್ತರ ಕನ್ನಡ ಜಿಲ್ಲೆ :**<br><br>ಸಾಗರಮಾಲಾ ಯೋಜನೆಯಡಿಯಲ್ಲಿ ಕಾರವಾರ ಬಂದರಿನ ಅಭಿವೃದ್ಧಿಗಾಗಿ ಕಾರವಾರ ಬಂದರಿನಲ್ಲಿ ಉತ್ತರ ದಿಕ್ಕಿಗೆ ಹೊಸದಾಗಿ 1160 ಮೀ. ಉದ್ದದ ಬ್ರೇಕ್‌ವಾಟರ್ ನಿರ್ಮಾಣ ಕಾಮಗಾರಿ ಹಾಗೂ ಪ್ರಸ್ತುತ ದಕ್ಷಿಣ ದಿಕ್ಕಿಗೆ ಇರುವ 250 ಮೀ. ಉದ್ದದ ಬ್ರೇಕ್‌ವಾಟರ್‌ನ್ನು 145 ಮೀ. ಉದ್ದಕ್ಕೆ ವಿಸ್ತರಿಸುವ ಕಾಮಗಾರಿಯನ್ನು ದಿನಾಂಕ:07.08.2022 ರೊಳಗೆ ಪೂರ್ಣಗೊಳಿಸಬೇಕಾಗಿರುತ್ತದೆ.<br><br>ಕಾರವಾರ ಬಂದರಿನಲ್ಲಿ 250 ಮೀ. ಉದ್ದದ ಕೋಸ್ಟಲ್ ಬರ್ತ್ ನಿರ್ಮಾಣ ಕಾಮಗಾರಿಗೆ ಒಪ್ಪಿಗೆ ಪತ್ರವನ್ನು ಗುತ್ತಿಗೆದಾರರಿಗೆ ನೀಡಲಾಗಿದೆ.<br><br>ಈ ಮಧ್ಯೆ ಬ್ರೇಕ್‌ವಾಟರ್ ಕಾಮಗಾರಿಯನ್ನು ಪ್ರಾರಂಭಿಸಿದಾಗ, ಸದರಿ ಕಾಮಗಾರಿಯನ್ನು ನಿರ್ವಹಿಸದಂತೆ ತಡೆ ಕೋರಿ ಬೈತ್‌ಖೋಲ್ ಬಂದರು ನಿರಾಶ್ರಿತರ ಯಾಂತ್ರೀಕೃತ ದೋಣಿ ಮೀನುಗಾರರ ಸಹಕಾರ ಸಂಘ, ಬೈತ್‌ಖೋಲ್, ಕಾರವಾರ ಇವರು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು ಇಲ್ಲಿ ದಿನಾಂಕ : 20.01.2020 ರಂದು ರಿಟ್ ಪಿಟಿಷನ್ ನಂ. 1332/2020 ಮತ್ತು 2336/2020 ರಂತೆ ಸಾರ್ವಜನಿಕ ಹಿತಾಸಕ್ತಿ ಮೊಕದ್ದಮೆ ದಾಖಲಿಸಿದ್ದು, ಮಾನ್ಯ ಉಚ್ಚ ನ್ಯಾಯಾಲಯವು ಸದರಿ ಕಾಮಗಾರಿಗಳಿಗೆ ತಾತ್ಕಾಲಿಕ ತಡೆಯಾಜ್ಞೆ ನೀಡಿದೆ. ಸದರಿ ಪ್ರಕರಣದ ವಿಚಾರಣೆಯನ್ನು ದಿನಾಂಕ:26.03.2021 ರಂದು ನಿಗದಿಪಡಿಸಿರುತ್ತದೆ. |

| ಕ್ರ.ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| | | **ದಕ್ಷಿಣ ಕನ್ನಡ ಜಿಲ್ಲೆ :**<br>ಸಾಗರಮಾಲಾ ಯೋಜನೆಯಡಿಯಲ್ಲಿ ಮಂಗಳೂರು ಹಳೇ ಬಂದರಿನಲ್ಲಿ ಕೋಸ್ಟಲ್ ಬರ್ತ್ ನಿರ್ಮಾಣ ಕಾಮಗಾರಿಯ ಜಾಗವನ್ನು ಗುತ್ತಿಗೆದಾರರಿಗೆ ದಿನಾಂಕ:27.11.20 ರಂದು ಹಸ್ತಾಂತರಿಸಲಾಗಿದ್ದು, ಗುತ್ತಿಗೆದಾರರು ಸದರಿ ಕಾಮಗಾರಿಯನ್ನು ದಿನಾಂಕ: 26.11.2023 ರೊಳಗೆ ಪೂರ್ಣಗೊಳಿಸಬೇಕಾಗಿರುತ್ತದೆ.<br>ಮಂಗಳೂರು ಹಳೇ ಬಂದರಿನಲ್ಲಿ ಕ್ಯಾಪಿಟಲ್ ಡ್ರೆಜಿಂಗ್ (ಬೆಂಗ್ರೆ ಬದಿ) ಕಾಮಗಾರಿಯ ಟೆಂಡರ್ ಪ್ರಕ್ರಿಯೆಯು ಪ್ರಗತಿಯಲ್ಲಿರುತ್ತದೆ. |

**ಕಡತ ಸಂಖ್ಯೆ: IDD 97 PSP 2021 (E- 465042)**

(ಎಸ್.ಅಂಗಾರ)
**ಮೀನುಗಾರಿಕೆ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು**